ಮೇಲ್ಭಾಗದಲ್ಲಿರುವ Print Form button ನ್ನು ಒತ್ತಿ ನೀವು ಭರ್ತಿ ಮಾಡಿರುವ ಅರ್ಜಿ ನಮೂನೆಯನ್ನು ಮುದ್ರಿಸಿಕೊಳ್ಳಬಹುದು. ಆನಂತರ ಯಾವುದೇ ಬದಲಾವಣೆಗೆ ಅವಕಾಶವಿರುವುದಿಲ್ಲ.

**ಹಂತ 9**:– Payment of Fees:- ಅರ್ಜಿ ಶುಲ್ಕವನ್ನು ಎರಡು ರೀತಿಯಲ್ಲಿ ಪಾವತಿಸಲು ಅವಕಾಶ ಕಲ್ಪಿಸಲಾಗಿದ್ದು, ಪ್ರಥಮವಾಗಿ ಈ ಅಂಚೆ ಕಛೇರಿಯ ಮೂಲಕ ಪಾವತಿಸಲು Challan Down load ಮಾಡಿಕೊಂಡು ಕರ್ನಾಟಕ ರಾಜ್ಯದ ಯಾವುದೇ ಇ–ಅಂಚೆ ಕಛೇರಿಯಲ್ಲಿ ನಿಗದಿತ ಶುಲ್ಕವನ್ನು ಪಾವತಿಸತಕ್ಕದ್ದು.

ದ್ವಿತೀಯವಾಗಿ, Online Payment ಮೂಲಕ ಪಾವತಿಸ ಬಯಸಿದಲ್ಲಿ Debit Card/Credit card/ Net Banking ಮೂಲಕ ಪಾವತಿಸಲು ಸಹ ಅವಕಾಶ ಕಲ್ಪಿಸಿದ್ದು ಅಂದರಂತೆ ನಿಗದಿತ ಶುಲ್ಕವನ್ನು ಪಾವತಿಸತಕ್ಕದ್ದು, ಅಂದರಂತೆ ನಿಗದಿತ ಶುಲ್ಕವನ್ನು ಪಾವತಿಸತಕ್ಕದ್ದು. (Online Payment ಆಗಿರುವ ಬಗ್ಗೆ ಖಾತರಿ ಪಡಿಸಿಕೊಳ್ಳಲು Payment status button ಒತ್ತಿ ಖಚಿತ ಪಡಿಸಿಕೊಳ್ಳಬಹುದು.

9.1 ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಮಿಂಚಂಚೆ (ಇ–ಮೇಲ್) ವಿಳಾಸವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು. ಜೊತೆಗೆ ಮತ್ತೊಂದು ಪರ್ಯಾಯ ಮಿಂಚಂಚೆ (ಇ–ಮೇಲ್) ವಿಳಾಸವನ್ನು ಸಹ ಒದಗಿಸತಕ್ಕದ್ದು.

9.2 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

**ವಿಶೇಷ ಸೂಚನೆ:** On-line ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ **(Help line) No. 8197367453, 9901234490, 8904985941, 8951107408, 9986760557, 7259270641.** ಮೂಲಕ ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

**ಅರ್ಜಿಗಳನ್ನು ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನುಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.**

**3. ಪರೀಕ್ಷಾ ಶುಲ್ಕ:–**

| | |
|---|---|
| ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳಿಗೆ | **₹. 300/–** |
| ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | **₹. 150/–** |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ | **₹. 25/–** |

**1) ಅಭ್ಯರ್ಥಿಗಳು ಪ್ರಥಮ ದರ್ಜೆ ಸಹಾಯಕರ / ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಹಿರಿಯ ಸಹಾಯಕರ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಒಂದೇ ಶುಲ್ಕವನ್ನು ಪಾವತಿಸತಕ್ಕದು.**

**2) ಅಭ್ಯರ್ಥಿಗಳು ದ್ವಿತೀಯ ದರ್ಜೆ ಸಹಾಯಕರ / ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಕಿರಿಯ ಸಹಾಯಕರ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಒಂದೇ ಶುಲ್ಕವನ್ನು ಪಾವತಿಸತಕ್ಕದು.**

**3) ಪ್ರಥಮ ದರ್ಜೆ ಸಹಾಯಕರ / ಹಿರಿಯ ಸಹಾಯಕರ ಮತ್ತು ದ್ವಿತೀಯ ದರ್ಜೆ ಸಹಾಯಕರ / ಕಿರಿಯ ಸಹಾಯಕರ ಹುದ್ದೆಗಳಿಗೆ ಅರ್ಜಿ ಸಲ್ಲಿಸಿದ್ದಲ್ಲಿ ಪ್ರತ್ಯೇಕವಾಗಿ ಶುಲ್ಕವನ್ನು ಪಾವತಿಸತಕ್ಕದು.**

**4) ಅಭ್ಯರ್ಥಿಗಳು ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಅರ್ಜಿ ಭರ್ತಿ ಮಾಡಲು On-Line ನಲ್ಲಿ ನೀಡಿರುವ ಸೂಚನೆಗಳನ್ವಯ ಭರ್ತಿ ಮಾಡತಕ್ಕದ್ದು.**

**5) ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.**

**6) ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂತಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಶುಲ್ಕವನ್ನು ಸಂದಾಯ ಮಾಡದಿದ್ದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**4. ಅರ್ಹತಾ ಷರತ್ತುಗಳು:**

ಅ) ಭಾರತೀಯ ನಾಗರೀಕನಾಗಿರತಕ್ಕದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

**5. ಶೈಕ್ಷಣಿಕ ವಿದ್ಯಾರ್ಹತೆ:–**

ಅ) ಸಿವಿಲ್ ಸೇವೆಯಡಿಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಹಿರಿಯ ಸಹಾಯಕರ ಹುದ್ದೆಗಳಿಗೆ:

ಭಾರತದಲ್ಲಿ ಕಾನೂನು ರೀತ್ಯ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದ ಪದವಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಅಥವಾ ಸರ್ಕಾರವು ಅಂತಹ ಪರೀಕ್ಷೆಗೆ ಸಮಾನವೆಂದು ಅಂಗೀಕರಿಸಿದ ವಿದ್ಯಾರ್ಹತೆಯನ್ನು ಹೊಂದಿರಬೇಕು.

**ಟಿಪ್ಪಣಿ: ಡಿಪ್ಲೊಮಾ, ಹಿಂದಿ ಸಭಾಗಳಿಂದ ಪಡೆದ ರತ್ನಾ, ವಿಶಾರದ, ಪಂಡಿತ್ ಇತ್ಯಾದಿ ವಿದ್ಯಾರ್ಹತೆಗಳನ್ನು ಪದವಿಗೆ ತತ್ಸಮಾನವೆಂದು KCS (Recruitment to the Ministerial Post) Rule 1978ರ ನಿಯಮಗಳಲ್ಲಿ ಅಧಿಸೂಚಿಸಿರುವುದಿಲ್ಲವಾದ್ದರಿಂದ, ಇವು ಪದವಿಗೆ ಸಮಾನವಾಗುವುದಿಲ್ಲ. ಆದ್ದರಿಂದ ಈ ವಿದ್ಯಾರ್ಹತೆಯ ಅಭ್ಯರ್ಥಿಗಳು ಸದರಿ ಹುದ್ದೆಗೆ ಅರ್ಹರಾಗುವುದಿಲ್ಲ.**

**ಆ) ಸಿವಿಲ್ ಸೇವೆಯಡಿಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಕಿರಿಯ ಸಹಾಯಕರ ಹುದ್ದೆಗಳಿಗೆ:**

ಕರ್ನಾಟಕ ಪದವಿ ಪೂರ್ವ ಶಿಕ್ಷಣ ಇಲಾಖೆಯು ನಡೆಸುವ ಪದವಿ ಪೂರ್ವ ಪರೀಕ್ಷೆ ಅಥವಾ ತತ್ಸಮಾನ ವಿದ್ಯಾರ್ಹತೆಗಳಾದ ಐಟಿಐ ಮತ್ತು ಇತರೆ ಮೂರು ವರ್ಷದ ಡಿಪ್ಲೊಮೋ ಕೋರ್ಸ್.

**ಟಿಪ್ಪಣಿ: ಮುಕ್ತ ವಿಶ್ವವಿದ್ಯಾಲಯಗಳು ನಡೆಸುವ 10+2 ಪರೀಕ್ಷೆಯನ್ನು ಸದರಿ ಹುದ್ದೆಗೆ ನಿಗದಿತ ವಿದ್ಯಾರ್ಹತೆ ಎಂದು ಪರಿಗಣಿಸಲಾಗುವುದಿಲ್ಲ.**

**<u>ಸೂಚನೆ</u>:–* (ಅ) ಮತ್ತು (ಆ) ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ.**

**6. <u>ಹುದ್ದೆಗಳ ವರ್ಗೀಕರಣ:–</u>**

(ಅ) ಸಿವಿಲ್ ಸೇವೆಯಡಿಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಹಿರಿಯ ಸಹಾಯಕರ ಹುದ್ದೆಗಳಿಗೆ:

ಈ ಹುದ್ದೆಗಳ ವರ್ಗೀಕರಣದ ವಿವರವನ್ನು ಅನುಬಂಧ–01ರಲ್ಲಿ ತೋರಿಸಿದೆ.

(ಆ) ಸಿವಿಲ್ ಸೇವೆಯಡಿಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಕಿರಿಯ ಸಹಾಯಕರ ಹುದ್ದೆಗಳಿಗೆ:

ಈ ಹುದ್ದೆಗಳ ವರ್ಗೀಕರಣದ ವಿವರವನ್ನು ಅನುಬಂಧ–02ರಲ್ಲಿ ತೋರಿಸಿದೆ.

(1) ಅಭ್ಯರ್ಥಿಯು ಪ್ರಥಮ /ದ್ವಿತೀಯ ದರ್ಜೆ ಸಹಾಯಕ ಹಾಗೂ ಕರ್ನಾಟಕ ಆಹಾರ ನಿಗಮದಲ್ಲಿನ ಹಿರಿಯ ಸಹಾಯಕರ / ಕಿರಿಯ ಸಹಾಯಕರ ಹುದ್ದೆಗಳಿಗೂ ಒಂದೇ ಅರ್ಜಿ ಸಲ್ಲಿಸಲು ಅವಕಾಶವಿದ್ದು, ಈ ಎಲ್ಲಾ ಹುದ್ದೆಗಳಿಗೂ ಆಯ್ಕೆ ಹೊಂದಿದ ಪಕ್ಷದಲ್ಲಿ, ಒಬ್ಬ ಅಭ್ಯರ್ಥಿಯು ಯಾವುದಾದರೂ ಒಂದು ಹುದ್ದೆಗೆ ಮಾತ್ರ ಕೆಲಸಕ್ಕೆ ಸೇರಲು ಅವಕಾಶವಿರುವುದರಿಂದ, ತಾನು ಸೇರಬಯಸುವ ಹುದ್ದೆಗೆ ತನ್ನ ಆದ್ಯತೆಯನ್ನು ಅರ್ಜಿಯಲ್ಲಿ ನೀಡಿರುವ ಆದ್ಯತಾ ಅಂಕಣದಲ್ಲಿ ನಮೂದಿಸತಕ್ಕದ್ದು.

(2) ಕರ್ನಾಟಕ ನಾಗರೀಕ ಸೇವೆಗಳು (ಲಿಖಿತ ಹುದ್ದೆಗಳ ನೇಮಕಾತಿ) ನಿಯಮಗಳು 1978ರ ಮತ್ತು ಅದರ (ತಿದ್ದುಪಡಿ) ನಿಯಮಗಳು 2015ರಲ್ಲಿ ನಿರ್ದಿಷ್ಟಪಡಿಸಿರುವಂತೆ, ಮೇಲ್ಕಂಡ ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಜಿಸಲ್ಲಿಸುವ ಅಭ್ಯರ್ಥಿಗಳು ತಮ್ಮ ಅರ್ಜಿಯಲ್ಲಿ ತಾನು ಅಪೇಕ್ಷಿಸುವ ಸೇವೆ ಅಥವಾ ಹುದ್ದೆಗೆ ಅಂದರೆ, ಆಯೋಗವು ಪ್ರಕಟಿಸಿರುವ ಕಂಡಿಕೆ–01 ರಲ್ಲಿ ನಮೂದಿಸಿರುವ ಇಲಾಖಾವಾರು ಎಲ್ಲಾ ಇಲಾಖೆಗಳನ್ನು ಅವರುಗಳ ಆದ್ಯತಾನುಸಾರ ಭರ್ತಿ ಮಾಡತಕ್ಕದ್ದು. ಒಂದು ವೇಳೆ ಯಾವುದೇ ಇಲಾಖೆ/ಎಲ್ಲ ಇಲಾಖೆಗಳ ಆದ್ಯತೆಯನ್ನು ನೀಡದೇ ಇದ್ದ ಪಕ್ಷದಲ್ಲಿ ಆಯೋಗವು ಪ್ರಕಟಿಸಿರುವ ಹಾಗೂ ಉಳಿದಿರುವ ಇಲಾಖೆಗಳಿಗೆ ಕ್ರಮಾನುಗತವಾಗಿ ಹಂಚಿಕೆ ಮಾಡಲಾಗುವುದು.

(3) ಅಭ್ಯರ್ಥಿಗಳಿಗೆ ಇಲಾಖಾ ಹಂಚಿಕೆಯನ್ನು ಕೌನ್ಸಿಂಗ್ ಮೂಲಕ ಅಥವಾ ಕರ್ನಾಟಕ ನಾಗರೀಕ ಸೇವೆಗಳು (ಲಿಖಿತ ಹುದ್ದೆಗಳ ನೇಮಕಾತಿ) ನಿಯಮಗಳು 1978ರ ಮತ್ತು ಅದರ (ತಿದ್ದುಪಡಿ) ನಿಯಮಗಳು 2015ರಲ್ಲಿ ನಿರ್ದಿಷ್ಟಪಡಿಸಿರುವಂತೆ, ನಿರ್ದಿಷ್ಟ ಪಡಿಸಿರುವಂತೆ ಮಾಡಲಾಗುವುದು. ಈ ಪ್ರಕ್ರಿಯೆಯು ಆಯೋಗದ ವಿವೇಚನೆಗೆ ಒಳಪಟ್ಟಿರುತ್ತದೆ.

ಅನುಬಂಧದಲ್ಲಿ ತೋರಿಸಿರುವ ವಿವಿಧ ನೇಮಕಾತಿ ಪ್ರಾಧಿಕಾರಿಗಳಲ್ಲಿ ಖಾಲಿಯಿರುವ ಪ್ರಥಮ ದರ್ಜೆ ಸಹಾಯಕರ ಮತ್ತು ದ್ವಿತೀಯ ದರ್ಜೆ ಸಹಾಯಕರ **ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ, ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣದಲ್ಲಿ ಬದಲಾವಣೆಯಾದಲ್ಲಿ ಅಂದರೆ ಕಡಿಮೆಯಾದಲ್ಲಿ ತಿದ್ದುಪಡಿ ಮತ್ತು ಹೆಚ್ಚಾದಲ್ಲಿ ಸೇರ್ಪಡೆ ಅಧಿಸೂಚನೆಯ ಮೂಲಕ ಪ್ರಕಟಿಸಲಾಗುವುದು. ಅಂತಿಮವಾಗಿ ಆಯ್ಕೆ ಹಂತಕ್ಕೆ ಬರುವ ಅಭ್ಯರ್ಥಿಗಳಿಗೆ, ಅವರುಗಳು ಇಲಾಖಾ ಆದ್ಯತೆಯನ್ನು ನೀಡುವ ಸಲುವಾಗಿ ಅಂತಹ** ಅಭ್ಯರ್ಥಿಗಳಿಗೆ ಮಾತ್ರ ಹುದ್ದೆಗಳ ವರ್ಗೀಕರಣವನ್ನು ಒದಗಿಸಲಾಗುವುದು.

**7. ವೇತನ ಶ್ರೇಣಿ :–**

**(ಅ) ಸಿವಿಲ್ ಸೇವೆಯಡಿಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಹಿರಿಯ ಸಹಾಯಕರ ಹುದ್ದೆಗಳಿಗೆ:**

₹ 14550–350–15600–400–17200–450–19000–500–21000–600–24600–700–26700

**(ಆ) ಸಿವಿಲ್ ಸೇವೆಯಡಿಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದಲ್ಲಿನ ಕಿರಿಯ ಸಹಾಯಕರ ಹುದ್ದೆಗಳಿಗೆ:**

₹ 11600–200–12000–250–13000–300–14200–350–15600–400–17200–450–19000–500–21000

**ಪಿಂಚಣಿ ಸೌಲಭ್ಯ:**

1) **ಸಿವಿಲ್ ಸೇವೆಯಡಿಯ ಪ್ರಥಮ ದರ್ಜೆ ಸಹಾಯಕರು ಮತ್ತು ಕಿರಿಯ ಸಹಾಯಕರು/ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006ರಂತೆ.**

2) ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತದ ಹಿರಿಯ ಸಹಾಯಕರು ಮತ್ತು ಕಿರಿಯ ಸಹಾಯಕರ ಹುದ್ದೆಗಳಿಗೆ ಸದರಿ ಪಿಂಚಣಿ ಸೌಲಭ್ಯ ಇರುವುದಿಲ್ಲ.

8. **ವಯೋಮಿತಿ:–** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು

ಆ) ಗರಿಷ್ಠ ವಯೋಮಿತಿ :

| | |
|---|---|
| **ಸಾಮಾನ್ಯ ವರ್ಗ** | **35 ವರ್ಷ** |
| **2ಎ,2ಬಿ,3ಎ,3ಬಿ** | **38 ವರ್ಷ** |
| **ಪ.ಜಾ/ಪ.ಪಂ/ಪ್ರ–1** | **40 ವರ್ಷ** |

**ಅಭ್ಯರ್ಥಿಗಳ ಜನ್ಮ ದಿನಾಂಕವನ್ನು ಅವರ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ) ಕ್ಯುಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಪರಿಗಣಿಸಲಾಗುವುದು. ಇವುಗಳನ್ನು ಹೊರತುಪಡಿಸಿ ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.**

**ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.**

- ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
- ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ ಐದು ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
- ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:** (ಎ) ಮಾಜಿ ಸೈನಿಕ ಎಂದರೆ ಸಶಸ್ತ್ರದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯುರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು (ಬಿ) ಕೇಂದ್ರ ಸಶಸ್ತ್ರದಳಗಳಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಅ) ಮೇಲ್ಕಂಡ ದಳದ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇನೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

ಈ ಮೇಲ್ಕಂಡ ವರ್ಗದ ಅಭ್ಯರ್ಥಿಗಳು ಮಾಜಿ ಸೈನಿಕ ಮೀಸಲಾತಿಗೆ ಅರ್ಹರಿರುತ್ತಾರೆ.

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವ ವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

- ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.
- ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸಮಾಡುತ್ತಿದ್ದರೆ, ಅಥವಾ ಹಿಂದೆಯಿದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು
- ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು
- ಅಭ್ಯರ್ಥಿಯು ಜೀತಕಾರ್ಮಿಕ ನಾಗಿದ್ದ ಪಕ್ಷದಲ್ಲಿ 10 ವರ್ಷಗಳು

  ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದಿಟ್ಟುಕೊಂಡಿರತಕ್ಕದ್ದು.
- ಅಂಗವಿಕಲ ಅಭ್ಯರ್ಥಿಗಳಿಗೆ 10 ವರ್ಷಗಳು

**9. ಸ್ಪರ್ಧಾತ್ಮಕ ಪರೀಕ್ಷೆ:–**

ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978ರ ಮತ್ತು ತಿದ್ದುಪಡಿ ಅಧಿಸೂಚನೆಗಳನ್ವಯ ನಡೆಸುವ ಈ ಪರೀಕ್ಷೆಯು ವಿವರಣಾತ್ಮಕ ಮತ್ತು ವಸ್ತುನಿಷ್ಠ ಬಹು ಆಯ್ಕೆ ಮಾದರಿಯ ಪತ್ರಿಕೆಗಳನ್ನು ಹೊಂದಿರುತ್ತದೆ.

**9.1 ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮ**

ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯು ಕೆಳಕಂಡ 3 ಪತ್ರಿಕೆಗಳನ್ನು ಹೊಂದಿರುತ್ತದೆ.

| ಪತ್ರಿಕೆ | ವಿಷಯ | ಅಂಕಗಳು | ಪರೀಕ್ಷಾ ಅವಧಿ | ಪರೀಕ್ಷಾ ವಿಧಾನ |
|---|---|---|---|---|
| ಪತ್ರಿಕೆ 1 | ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ | 150 ಅಂಕಗಳು | 1½ ಗಂಟೆಗಳ ಅವಧಿ | (ವಿವರಣಾತ್ಮಕ ಪತ್ರಿಕೆ/ Descriptive Type) |
| ಪತ್ರಿಕೆ 2 | ಸಾಮಾನ್ಯ ಕನ್ನಡ/ ಸಾಮಾನ್ಯ ಇಂಗ್ಲೀಷ್ | 100 ಅಂಕಗಳು | 1½ ಗಂಟೆಗಳ ಅವಧಿ | (ವಸ್ತುನಿಷ್ಠ ಬಹು ಆಯ್ಕೆ ಪತ್ರಿಕೆ/ Objective Multiple Choice Type) |
| ಪತ್ರಿಕೆ 3 | ಸಾಮಾನ್ಯ ಜ್ಞಾನ | 100 ಅಂಕಗಳು | 1½ ಗಂಟೆಗಳ ಅವಧಿ | (ವಸ್ತುನಿಷ್ಠ ಬಹು ಆಯ್ಕೆ ಪತ್ರಿಕೆ/ Objective Multiple Choice Type) |

ಪ್ರತಿಯೊಂದು ಪತ್ರಿಕೆಯನ್ನು 1½ ಗಂಟೆ ಸಮಯದಲ್ಲಿ ಉತ್ತರಿಸಬೇಕಾಗುತ್ತದೆ. ಸಾಮಾನ್ಯ ಜ್ಞಾನ ಮತ್ತು ಸಾಮಾನ್ಯ ಕನ್ನಡ/ಸಾಮಾನ್ಯ ಇಂಗ್ಲಿಷ್ ಈ ಎರಡು ಪತ್ರಿಕೆಗಳು "ವಸ್ತುನಿಷ್ಠ ಬಹು ಆಯ್ಕೆಯ/Objective Multiple Choice Type" ವಿಧಾನದ್ದಾಗಿದ್ದು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯು "ವಿವರಣಾತ್ಮಕ ಪತ್ರಿಕೆ/ Descriptive Type" ವಿಧಾನದ್ದಾಗಿರುವುದು.

9.2 ಆಹಾರ ಮತ್ತು ನಾಗರೀಕ ಸರಬರಾಜು ನಿಗಮ (ನಿ)ದಲ್ಲಿನ ಹಿರಿಯ ಸಹಾಯಕರ ಮತ್ತು ಕಿರಿಯ ಸಹಾಯಕರ ಹುದ್ದೆಗಳನ್ನು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2014ರಡಿ ನಿರ್ದಿಷ್ಟಪಡಿಸಲಾದ ಮತ್ತು ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978ರಡಿ ಸ್ಪರ್ಧಾತ್ಮಕ ಪರೀಕ್ಷೆಯು ಕೆಳಕಂಡ 3 ಪತ್ರಿಕೆಗಳನ್ನು ಹೊಂದಿರುತ್ತದೆ.

| ಪತ್ರಿಕೆ | ವಿಷಯ | ಅಂಕಗಳು | ಪರೀಕ್ಷಾ ಅವಧಿ | ಪರೀಕ್ಷಾ ವಿಧಾನ |
|---|---|---|---|---|
| ಪತ್ರಿಕೆ 2 | ಸಾಮಾನ್ಯ ಕನ್ನಡ/ ಸಾಮಾನ್ಯ ಇಂಗ್ಲೀಷ್ | 100 ಅಂಕಗಳು | 1½ ಗಂಟೆಗಳ ಅವಧಿ | (ವಸ್ತುನಿಷ್ಠ ಬಹು ಆಯ್ಕೆ ಪತ್ರಿಕೆ/ Objective Multiple Choice Type) |
| ಪತ್ರಿಕೆ 3 | ಸಾಮಾನ್ಯ ಜ್ಞಾನ | 100 ಅಂಕಗಳು | 1½ ಗಂಟೆಗಳ ಅವಧಿ | (ವಸ್ತುನಿಷ್ಠ ಬಹು ಆಯ್ಕೆ ಪತ್ರಿಕೆ/ Objective Multiple Choice Type) |
| ಪತ್ರಿಕೆ 4 | ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ | 80 ಅಂಕಗಳು | 1½ ಗಂಟೆಗಳ ಅವಧಿ | (ವಸ್ತುನಿಷ್ಠ ಬಹು ಆಯ್ಕೆ ಪತ್ರಿಕೆ/ Objective Multiple Choice Type) |

ಈ ಮೇಲಿನ ಹುದ್ದೆಗಳ ನೇಮಕಾತಿಗಾಗಿ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮವನ್ನು ಅನುಬಂಧ–05 ಮತ್ತು ಅನುಬಂಧ–06 ರಲ್ಲಿ ತೋರಿಸಲಾಗಿದೆ.

**ವಿಶೇಷ ಸೂಚನೆ:–ಈ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಆಯ್ಕೆಯಾದಲ್ಲಿ, ಅಂತಹ ಅಭ್ಯರ್ಥಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು ಮತ್ತು ಅನುಕಂಪ ಆಧಾರಿತ ನಿಯಮಗಳು ಅನ್ವಯವಾಗುವುದಿಲ್ಲ. ಅಲ್ಲದೇ ಸಿವಿಲ್ ಸೇವೆಯಡಿ ನಿರ್ದಿಷ್ಟಪಡಿಸಿರುವ ಕೆ.ಜಿ.ಐ.ಡಿ, ಜಿ.ಪಿ.ಎಫ್, ಸಮೂಹ ವಿಮೆ ಮತ್ತು ಇನ್ನಿತರ ಸೌಲಭ್ಯಗಳು ಸಹ ಲಭ್ಯವಾಗುವುದಿಲ್ಲ.**

**9.3. ಕಡ್ಡಾಯ ಕನ್ನಡ ಪರೀಕ್ಷೆ:** (ಪಠ್ಯಕ್ರಮವನ್ನು ಅನುಬಂಧ–06ರಲ್ಲಿ ನೋಡತಕ್ಕದ್ದು) ಮೇಲ್ಕಂಡ ಹುದ್ದೆಗಳ ಆಯ್ಕೆಗೆ ಅರ್ಹರಾಗಲು ಅಭ್ಯರ್ಥಿಗಳಿಗೆ ಎಸ್.ಎಸ್.ಎಲ್.ಸಿ. ಪರೀಕ್ಷೆಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಆಯ್ಕೆಗೆ ಅರ್ಹರಾಗುವುದಿಲ್ಲ. ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ, ಪರಂತು ಎಸ್.ಎಸ್.ಎಲ್.ಸಿ ಅಥವಾ ಅದಕ್ಕೆ ತತ್ಸಮಾನವೆಂದು ಘೋಷಿಸಲ್ಪಟ್ಟ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆ/ದ್ವಿತೀಯ ಭಾಷೆ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿದ್ದರೆ ಅಥವಾ ಲೋಕಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ, ಕನ್ನಡ ಭಾಷಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ ಬಗ್ಗೆ ವಿನಾಯಿತಿ ನೀಡಲಾಗುವುದು.

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳ ಸಾಮಾನ್ಯ ಕನ್ನಡ/ಸಾಮಾನ್ಯ ಇಂಗ್ಲೀಷ್ ಮತ್ತು ಸಾಮಾನ್ಯ ಜ್ಞಾನ ಪತ್ರಿಕೆಗಳನ್ನು ಮಾತ್ರ ಮೌಲ್ಯಮಾಪನ ಮಾಡಲಾಗುವುದು. ಕನ್ನಡ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಗಳಿಸದ ಅಭ್ಯರ್ಥಿಗಳ ಸಾಮಾನ್ಯ ಕನ್ನಡ/ಸಾಮಾನ್ಯ ಇಂಗ್ಲೀಷ್ ಮತ್ತು ಸಾಮಾನ್ಯ ಜ್ಞಾನ ಪತ್ರಿಕೆಯ ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

**ವಿ.ಸೂ:– ಪತ್ರಿಕೆ–2ರ ಸಾಮಾನ್ಯ ಕನ್ನಡ ಅಥವಾ ಇಂಗ್ಲೀಷ್ ಇವುಗಳಲ್ಲಿ ಯಾವುದಾದರೂ ಒಂದಕ್ಕೆ ಮಾತ್ರ ಉತ್ತರಿಸಬೇಕಿರುವುದರಿಂದ, ಅಭ್ಯರ್ಥಿಗಳು ಸಾಮಾನ್ಯ ಕನ್ನಡ ಅಥವಾ ಸಾಮಾನ್ಯ ಇಂಗ್ಲೀಷ್ ಎದುರುಗಿರುವ ಎರಡು ವೃತ್ತಗಳಲ್ಲಿ ಅಥವಾ ವಿಷಯ ಸಂಕೇತಗಳಲ್ಲಿ ತಾವು ಉತ್ತರಿಸುವ ವಿಷಯದ ಎದುರಿನ ಒಂದು ವೃತ್ತ ಅಥವಾ ಸಂಕೇತವನ್ನು ನಮೂದಿಸತಕ್ಕದ್ದು.**

**10. ಸ್ಪರ್ಧಾತ್ಮಕ ಪರೀಕ್ಷೆಯನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಮತ್ತು ಆಯೋಗವು ನಿಗದಿಪಡಿಸುವ ಇತರೆ ಯಾವುದೇ ಕೇಂದ್ರಗಳಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಅರ್ಜಿಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ಕೇಂದ್ರವನ್ನು ನಮೂದಿಸತಕ್ಕದ್ದು. ಆದರೂ, ತಾಲ್ಲೂಕು ಕೇಂದ್ರಗಳಲ್ಲಿ ಪರೀಕ್ಷೆ ನಡೆಸುವ ಸನ್ನಿವೇಶ ಎದುರಾದಲ್ಲಿ ಅರ್ಜಿಯಲ್ಲಿ ಅಭ್ಯರ್ಥಿಗಳು ನೀಡಿರುವ ವಿಳಾಸವನ್ನಾಧರಿಸಿ ತಾಲ್ಲೂಕು ಕೇಂದ್ರಗಳಲ್ಲಿಯೂ ಸಹ ಪರೀಕ್ಷೆ ನಡೆಸಲಾಗುವುದು. ಪರೀಕ್ಷಾ ಕೇಂದ್ರವನ್ನು ನಿಗದಿಪಡಿಸುವುದು ಆಯೋಗದ ಅಂತಿಮ ತೀರ್ಮಾನವಾಗಿರುತ್ತದೆ. ಪರೀಕ್ಷೆಗಳ ದಿನಾಂಕವನ್ನು ಮುಂದೆ ಜಾಹೀರಾತು ಪಡಿಸಲಾಗುವುದು ಹಾಗೂ ಆಯೋಗದ ವೆಬ್ ಸೈಟ್ "http://kpsc.kar.nic.in" ನಲ್ಲಿ ಬಿತ್ತರಿಸಲಾಗುವುದು. ಪರೀಕ್ಷೆಗಳ ದಿನಾಂಕಗಳನ್ನು ಅಧಿಸೂಚಿಸಿದಾಗ ಪ್ರವೇಶ ಪತ್ರಗಳನ್ನು ಆಯೋಗದ ಅಂತರ್ಜಾಲದಿಂದ ಅಭ್ಯರ್ಥಿಗಳು ಡೌನ್ ಲೋಡ್ ಮಾಡಿಕೊಳ್ಳಬೇಕು. ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಪ್ರತ್ಯೇಕವಾಗಿ ರವಾನಿಸಲಾಗುವುದಿಲ್ಲ. ಹಾಗೂ ಅಧಿಸೂಚನೆಯ ಕಂಡಿಕೆ 1(1) ರಲ್ಲಿ ತಿಳಿಸಿರುವ ಒಂದು ಮೂಲ ಗುರುತಿನ ಚೀಟಿಯೊಂದಿಗೆ ಪರೀಕ್ಷಾ ಕೇಂದ್ರಕ್ಕೆ ಹಾಜರಾಗತಕ್ಕದ್ದು.**

**11. ನೇಮಕಾತಿ ವಿಧಾನ:**

ಕರ್ನಾಟಕ ನಾಗರೀಕ ಸೇವೆಗಳು (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978 ಮತ್ತು ಅದರ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 90 ಎಸ್‌ಸಿಆರ್ 85 ದಿನಾಂಕ:27–02–1992 ರಂತೆ ಆಯೋಗವು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಅಂಕಗಳ ಜೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಇರುವ ಮೀಸಲಾತಿಯನ್ವಯ ಅಂತಿಮವಾಗಿ ಲಭ್ಯವಾಗುವ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಆಯ್ಕೆ ಪಟ್ಟಿ ತಯಾರಿಸಲಾಗುವುದು.

**ವಿಶೇಷ ಸೂಚನೆ: ಈ ಮೇಲ್ಕಂಡ ಹುದ್ದೆಗಳ ಆಯ್ಕೆಗೆ ಮೌಖಿಕ ಪರೀಕ್ಷೆ ಇರುವುದಿಲ್ಲ.**

**12.1. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:**

ಜಾತಿ ಮೀಸಲಾತಿ ಕೋರಬಯಸುವ

- ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ
- ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ
- 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಶೀಲ್ದಾರರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು, ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಅಂದರೆ, ಹಿಂದುಳಿದ ವರ್ಗಗಳ ಪ್ರ–2ಎ, ಪ್ರ–2ಬಿ, ಪ್ರ–3ಎ ಮತ್ತು ಪ್ರ–3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದ ದಿನಾಂಕದಿಂದ ಅರ್ಜಿಗಳನ್ನು ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದವರೆಗೆ 05 ವರ್ಷಗಳ ಅವಧಿಯಲ್ಲಿರಬೇಕು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.

**12.2. ಗ್ರಾಮೀಣ ಅಭ್ಯರ್ಥಿ:**

- ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಈ ಪ್ರಮಾಣ ಪತ್ರಗಳು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
- ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟು ಕೊಂಡಿರತಕ್ಕದ್ದು.

➡ ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಪಡೆದಿರತಕ್ಕದ್ದು.

➡ ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ.

**ಸೂಚನೆ: ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2ರ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಅದಕ್ಕೆ ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.**

**12.3. ಕನ್ನಡ ಮಾಧ್ಯಮ ಅಭ್ಯರ್ಥಿ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧ ಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

**12.4. ಅಂಗವಿಕಲ ಅಭ್ಯರ್ಥಿ :**

ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳೂ 1977ರ ಉಪನಿಯಮ 2(ಕೆ) (ii) ರಲ್ಲಿ ನಿರ್ದಿಷ್ಟಪಡಿಸಿರುವ ಕ್ರಮ ಸಂಖ್ಯೆ: i ರಿಂದ vii ರವರೆಗಿನ (Blind, Low vision, Leprosy cured, Hearing impairment, Locomotor disability, Mental retardation & Mental illness) ವೈಕಲ್ಯತೆಯ ಶೇ.40ಕ್ಕೆ ಕಡಿಮೆಯಿಲ್ಲದಿರುವ ಅಂಗವಿಕಲ ವ್ಯಕ್ತಿಗಳು.

ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ: 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ, ಅಂಗವಿಕಲತೆಯ ಬಗ್ಗೆ ಜಿಲ್ಲಾಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಸೆನೆನಿ 2006, ದಿನಾಂಕ: 30–10–2007ರಲ್ಲಿ ಅಂಧ/ದೃಷ್ಟಿ ಮಾಂದ್ಯ ಅಂಗವಿಕಲತೆಯ ಮೀಸಲಾತಿ ಕೋರಿದ್ದಲ್ಲಿ, ಆಯ್ಕೆ ಪ್ರಾಧಿಕಾರವಾದ ಆಯೋಗವು ವೈದ್ಯಕೀಯ ಸಮಿತಿಯನ್ನು ರಚಿಸಿ, ವೈದ್ಯಕೀಯ ಪರೀಕ್ಷೆಯಲ್ಲಿ ಅಂತಹ ಅಭ್ಯರ್ಥಿಗಳ ಅಂಧ/ದೃಷ್ಟಿ ಮಾಂದ್ಯತೆಯನ್ನು ಪರೀಕ್ಷಿಸಿ ಖಚಿತಪಡಿಸಿಕೊಳ್ಳಬೇಕೆಂದು ನಿರ್ದಿಷ್ಟಪಡಿಸಿದ್ದು, ಅದರಂತೆ ಆಯೋಗವು ಪರೀಕ್ಷಾ ಪೂರ್ವ ಅಥವಾ ಪರೀಕ್ಷೋತ್ತರದ ನಂತರ ನಡೆಸುವ ವೈದ್ಯಕೀಯ ಪರೀಕ್ಷೆಯ ಅಂತಿಮ ವರದಿಗೆ ಅಂಧ/ದೃಷ್ಟಿ ಮಾಂದ್ಯ ಅಭ್ಯರ್ಥಿಗಳ ಮೀಸಲಾತಿಯು ಬದ್ಧವಾಗಿರುತ್ತದೆ.

**12.5 ಯೋಜನಾ ನಿರಾಶ್ರಿತ ಅಭ್ಯರ್ಥಿ :**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸೆನೆನಿ 99, ದಿನಾಂಕ: 23–11–2000ರನ್ವಯ ಯೋಜನೆಗಳಿಂದ ನಿರ್ವಸಿತರಾದ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸತಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ) ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ಸೂಚನೆ: 1) ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.**

**1) ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.**

**12.6 ಅನುಚ್ಛೇಧ 371(ಜೆ)ರಂತೆ ಹೈದರಾಬಾದ್ –ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾತಿ :**

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ವ್ಯಕ್ತಿಯೆಂಬ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು **ಅನುಬಂಧ–'ಎ'ರಲ್ಲಿ** ಸೂಚಿಸಿರುವ ನಮೂನೆಯಲ್ಲಿಯೇ ಅರ್ಹತಾ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರವಾದ ಸಂಬಂಧಪಟ್ಟ ಉಪ ವಿಭಾಗದ ಸಹಾಯಕ ಆಯುಕ್ತರಿಂದ ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ **ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು**. ಈ ಪ್ರಮಾಣ ಪತ್ರದ ನಮೂನೆಯನ್ನು **ಅನುಬಂಧ–08 ರಡಿಯಲ್ಲಿ** ತೋರಿಸಲಾಗಿದೆ. **ಈ ನಮೂನೆಯನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಯಲ್ಲಿ ಪಡೆಯಲಾದ ಅರ್ಹತಾ ಪ್ರಮಾಣ ಪತ್ರವನ್ನು ತಿರಸ್ಕರಿಸಲಾಗುವುದು.**

**13. ಅಭ್ಯರ್ಥಿಗಳು ON-LINE ಅರ್ಜಿ ಸಲ್ಲಿಸುವುದರಿಂದ, ಜನ್ಮ ದಿನಾಂಕದ ಸಮರ್ಥನೆಗಾಗಿ** SSLC **ಅಂಕಪಟ್ಟಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ** (TC), Cumulative Record**ನ ಉದೃತ ಭಾಗವನ್ನು ಸ್ಕ್ಯಾನ ಮಾಡಿ ಅಪ್ ಲೋಡ್ ಮಾಡತಕ್ಕದ್ದು;**

**13.1 ಪ್ರಥಮ ದರ್ಜೆ ಸಹಾಯಕರ/ಹಿರಿಯ ಸಹಾಯಕರ ಹುದ್ದೆಗೆ ನಿಗಧಿಪಡಿಸಲಾದ ಪದವಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ ಅಥವಾ** Graduation Certificate **ಮತ್ತು ದ್ವಿತೀಯ ದರ್ಜೆ ಸಹಾಯಕರ/ಕಿರಿಯ ಸಹಾಯಕರ ಹುದ್ದೆಗೆ ನಿಗಧಿಪಡಿಸಲಾದ** PUC **ಅಥವಾ ತತ್ಸಮಾನ ವಿದ್ಯಾರ್ಹತೆಗಳಾದ** ITI **ಅಥವಾ ಮೂರು ವರ್ಷಗಳ** Diploma **ಪ್ರಮಾಣ ಪತ್ರಗಳನ್ನು ಸ್ಕ್ಯಾನ್ ಮಾಡಿ ಅಧಿಸೂಚನೆಯ ಕಂಡಿಕೆ (02) ರ ಹಂತ (04) ರಲ್ಲಿ ವಿವರಿಸಲಾದಂತೆ ಕಡ್ಡಾಯವಾಗಿ ಅಪ್ ಲೋಡ ಮಾಡತಕ್ಕದು. ಈ ಮೇಲ್ಕಂಡ ದಾಖಲೆಗಳನ್ನು ಹೊರತುಪಡಿಸಿ ಉಳಿದ ಯಾವುದೇ ದಾಖಲೆಗಳನ್ನು ಅಪ್ ಲೋಡ್ ಮಾಡುವಂತಿಲ್ಲ.**

**13.2 ಹೈದರಾಬಾದ್–ಕರ್ನಾಟಕ ಮೀಸಲಾತಿ ಕೋರುವ ಸರ್ಕಾರಿ ನೌಕರರು, ಈ ಮೀಸಲಾತಿ ಕೋರುವ ಅಭ್ಯರ್ಥಿಗಳು ಅರ್ಹತಾ ಪ್ರಮಾಣ ಪತ್ರದ ಜೊತೆಗೆ ಸ್ವ–ಗ್ರಾಮ ಪ್ರಮಾಣ ಪತ್ರವನ್ನು, ಹೈದರಾಬಾದ್–ಕರ್ನಾಟಕ ಉಪ ನಿಯಮ 5(2) ರಂತೆ ನೇಮಕಾತಿ ಪ್ರಾಧಿಕಾರಿಗಳಿಂದ ನಿರಾಪೇಕ್ಷಣಾ (NOC)ಪತ್ರವನ್ನು ಪಡೆದಿಟ್ಟುಕೊಂಡು, ಆಯೋಗವು ಅಪೇಕ್ಷಿಸಿದಲ್ಲಿ ಸಲ್ಲಿಸತಕ್ಕದ್ದು.**

**13.3 ಈ ಕೆಳಕಂಡ ಪ್ರಮಾಣ ಪತ್ರಗಳನ್ನು/ದಾಖಲಾತಿಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಅಂದರೆ, ದಿನಾಂಕ: 04–01–2017ರ ಒಳಗೆ ಪಡೆದಿರಬೇಕು ಹಾಗೂ ಸಿಂಧುವಾಗಿರಬೇಕು, ಹಾಗೂ ಆಯೋಗವು ಪರಿಶೀಲನೆಗಾಗಿ ಹಾಜರುಪಡಿಸಲು ಸೂಚಿಸಿದಾಗ ಅರ್ಜಿಯಲ್ಲಿ ನಮೂದಿಸಿರುವ ಮೀಸಲಾತಿಯ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗುವುದು.**

1) **ಕಡ್ಡಾಯವಾಗಿ ಹಾಜರು ಪಡಿಸಬೇಕಾದ ವಿದ್ಯಾರ್ಹತೆ/ಜನ್ಮ ದಿನಾಂಕ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ: ಅಭ್ಯರ್ಥಿಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.**

2) **ವಿವಿಧ ಮೀಸಲಾತಿ ಕೋರಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ: ಆ ಮೀಸಲಾತಿಯನ್ನು ರದ್ದು ಪಡಿಸಿ, ಸಾಮಾನ್ಯ ಅರ್ಹತೆಯಲ್ಲಿ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು, ಇಲ್ಲವಾದಲ್ಲಿ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.**

**13.4 <u>ಕಡ್ಡಾಯವಾಗಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:</u>**

1. ಸಹಾಯಕರ/ ಪ್ರಥಮ ದರ್ಜೆ ಸಹಾಯಕ ಹುದ್ದೆಗೆ, ಹಿರಿಯ ಸಹಾಯಕರ ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪದವಿಯ ಪ್ರಮಾಣ ಪತ್ರಗಳು ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿಗಳು.
2. ಕಿರಿಯ ಸಹಾಯಕರ/ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪದವಿ ಪೂರ್ವ ಶಿಕ್ಷಣ ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿಗಳು.
3. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ (ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ (Extract of Cumulative Record)
4. ವಿವಿಧ ಮೀಸಲಾತಿಗಳನ್ನು ಕೋರಿದ್ದಲ್ಲಿ, ಮೀಸಲಾತಿ ಪ್ರಮಾಣ ಪತ್ರಗಳು.

**13.5 <u>ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು :</u>**

1. ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ

   **ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಅ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.
2. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ **ಡಿ/ಇ/ಎಫ್** ನಲ್ಲಿ ತಹಶೀಲ್ದಾರ್‌ರವರಿಂದ ಪಡೆದಿರುವ ಪ್ರಮಾಣ ಪತ್ರ.
3. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು (Circle) ತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ('No Objection' Certificate) ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ದಿನಾಂಕ:30–12–2016ರ ಒಳಗೆ ಪಡೆದಿಟ್ಟುಕೊಂಡಿರಬೇಕು.
4. ಹೈದರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳ ಮೀಸಲಾತಿಗೆ ಸಂಬಂಧಿಸಿದ ಅರ್ಹತಾ ಪ್ರಮಾಣಪತ್ರ.
5. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ
6. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.
7. ಅಂಗವಿಕಲ ಅಭ್ಯರ್ಥಿಗಳು ನಿಗದಿಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣ ಪತ್ರ.
8. ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು, ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣಪತ್ರ.

ಈ ಮೇಲಿನ ಅರ್ಹತೆ, ಮೀಸಲಾತಿ ಇತ್ಯಾದಿಗಳನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಜೇಷ್ಠತೆ ಮತ್ತು ಮೀಸಲಾತಿ ಆಧಾರದ ಮೇಲೆ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದು.

**14. <u>ಪ್ರಮುಖ ಸೂಚನೆಗಳು:</u>**

**1.** ಅಭ್ಯರ್ಥಿಗಳು ON-LINE ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಆಯೋಗವು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ನೀಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ.

2. ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ, ಪರೀಕ್ಷಾ ಕೇಂದ್ರ ಹಾಗೂ ವಯೋಮಿತಿ ಸಡಿಲಿಕೆ, ಇತ್ಯಾದಿ ವಿವರಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು ಹಾಗೂ ಈ ಬಗ್ಗೆ ಆನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆ ಪತ್ರಗಳನ್ನು ಪುರಸ್ಕರಿಸಲಾಗುವುದಿಲ್ಲ.
3. ಅಪೂರ್ಣವಾಗಿರುವ, ಫೋಟೋ ಮತ್ತು ಸಹಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ಕಡ್ಡಾಯವಾಗಿ ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
5. ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರವಹಿಸತಕ್ಕದ್ದು.

**15. <u>ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು</u>:–**

| | | | |
|---|---|---|---|
| ಸಾ.ಅ | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ–1 | ಪ್ರವರ್ಗ–1 | Cat – 1 | Category – I |
| 2ಎ | ಪ್ರವರ್ಗ–2ಎ | 2A | Category – 2A |
| 2ಬಿ | ಪ್ರವರ್ಗ–2ಬಿ | 2B | Category – 2B |
| 3ಎ | ಪ್ರವರ್ಗ–3ಎ | 3A | Category – 3A |
| 3ಬಿ | ಪ್ರವರ್ಗ–3ಬಿ | 3B | Category – 3B |
| ಮಾ.ಸೈ | ಮಾಜಿ ಸೈನಿಕ | Ex-MP | Ex-Military Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |
| ಕ.ಮಾ.ಅ | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಯೋ.ಅ | ಯೋಜನಾ ನಿರಾಶ್ರಿತ ಅಭ್ಯರ್ಥಿ | PDP | Project Displaced Person |
| ಅಂ.ವಿ. | ಅಂಗವಿಕಲ | PH | Physically Handicapped Person |
| ಹೈ.ಕ. | ಹೈದರಾಬಾದ್–ಕರ್ನಾಟಕ | H.K. | Hyderabad-Karnataka |

**16. <u>ಪ್ರವೇಶ ಪತ್ರ</u>:**

**<u>ಆಯೋಗವು ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಕಳುಹಿಸುವುದಿಲ್ಲ. ಅಭ್ಯರ್ಥಿಗಳು ಸ್ವತಃ ಆಯೋಗದ ವೆಬ್‌ಸೈಟಿನಿಂದ ಪ್ರವೇಶ ಪತ್ರಗಳನ್ನು Down Load ಮಾಡಿಕೊಂಡು ಪರೀಕ್ಷೆಗೆ ಹಾಜರಾಗತಕ್ಕದ್ದು. ಪ್ರವೇಶ ಪತ್ರಗಳನ್ನು Down Load ಮಾಡಿಕೊಳ್ಳುವ ಅಂಶವನ್ನು ಆಯೋಗದ ಅಂತರ್ಜಾಲದಲ್ಲಿ ಪ್ರಕಟಿಸಲಾಗುವುದು.</u>**

**17. <u>ಆಯೋಗದೊಡನೆ ಪತ್ರ ವ್ಯವಹಾರ:</u>**

ಆಯೋಗವು ಅಭ್ಯರ್ಥಿತ್ವದ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಪರೀಕ್ಷೆಗಾಗಿ ಪ್ರವೇಶ ಪತ್ರವನ್ನು ಡೌನ್‌ಲೋಡ್ ಮಾಡಿಕೊಳ್ಳುವಲ್ಲಿ ಸಮಸ್ಯೆ ಉಂಟಾದಲ್ಲಿ, ಸಹಾಯವಾಣಿ **(Help line) No. 8197367453, 9901234490, 8904985941, 8951107408, 9986760557, 7259270641.** ಸಂಪರ್ಕಿಸತಕ್ಕದ್ದು. ಅಭ್ಯರ್ಥಿಯು ಮಾಹಿತಿಗಾಗಿ ಸಂಪರ್ಕಿಸುವ ಸಮಯದಲ್ಲಿ ಈ ಹುದ್ದೆಗಳಿಗೆ ಸಲ್ಲಿಸಿದ ಅರ್ಜಿಯ ಕ್ರಮಸಂಖ್ಯೆ, ಜನ್ಮ ದಿನಾಂಕ, ಕೋರಿದ ಪರೀಕ್ಷಾ ಕೇಂದ್ರ ಇತ್ಯಾದಿ ವಿವರಗಳನ್ನು ನೀಡತಕ್ಕದ್ದು.

**18. <u>ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆಗಳು:</u>**

| | | |
|---|---|---|
| **ಕೇಂದ್ರ ಕಛೇರಿಯ ಮಾಹಿತಿ ಕೇಂದ್ರ** | **:** | **080–30574957/ 080–30574901** |
| **ಪ್ರಾಂತೀಯ ಕಛೇರಿ ಮೈಸೂರು** | **:** | **0821–2545956** |
| **ಪ್ರಾಂತೀಯ ಕಛೇರಿ ಬೆಳಗಾವಿ** | **:** | **0831–2475345** |
| **ಪ್ರಾಂತೀಯ ಕಛೇರಿ ಗುಲ್ಬರ್ಗಾ** | **:** | **08472–227944** |
| **ಪ್ರಾಂತೀಯ ಕಛೇರಿ ಶಿವಮೊಗ್ಗ** | **:** | **08182–228099** |

**18. <u>ದುರ್ನಡತೆ :</u>**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಹೊಂದಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು

ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯೋಗದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಆಯೋಗವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

**ಸುಬೋದ್ ಯಾದವ್**

ಕಾರ್ಯದರ್ಶಿ,

ಕರ್ನಾಟಕ ಲೋಕಸೇವಾ ಆಯೋಗ.

**ಅನುಬಂಧ–1**

**ಪ್ರಥಮ ದರ್ಜೆ ಸಹಾಯಕರು ಮತ್ತು ಆಹಾರ ಮತ್ತು ನಾಗರೀಕ ಸರಬರಾಜು ನಿಗಮದಲ್ಲಿನ ಹಿರಿಯ ಸಹಾಯಕರ ಹುದ್ದೆಗಳ ವರ್ಗೀಕರಣ**

**(01) ಸಾರಿಗೆ ಇಲಾಖೆ, ಬೆಂಗಳೂರು**

ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ–14

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | – | – | 01 | – | – | – | – | **01** |
| ಪ.ಪಂ. | 01 | – | – | – | – | – | – | **01** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 02 | 04 | 03 | 01 | – | – | 01 (*) | **11** |
| ಒಟ್ಟು : | **04** | **04** | **04** | **01** | – | – | **01** | **14** |

ಅಂ.ವಿ :– * ದೃಷ್ಟಿ ಮಾಂದ್ಯ

**(02) ಕಾನೂನು ಮಾಪನ ಶಾಸ್ತ್ರ ಇಲಾಖೆ, ಬೆಂಗಳೂರು**

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ–04

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | – | – | – | – | – | – | – | – |
| ಪ.ಪಂ. | – | – | – | – | – | – | – | – |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | – | – | – | – | – | – | **01** |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | – | – | 01 | – | – | – | 01 (*) | **02** |
| ಒಟ್ಟು : | **02** | – | **01** | – | – | – | **01** | **04** |

ಅಂ.ವಿ :– * ದೃಷ್ಟಿ ಮಾಂದ್ಯ

| ಕಾನೂನು ಮಾಪನ ಶಾಸ್ತ್ರ ಇಲಾಖೆ, ಬೆಂಗಳೂರು<br>ಹೈದರಾಬಾದ್–ಕರ್ನಾಟಕ ಹುದ್ದೆಗಳ ಸಂಖ್ಯೆ–01 | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
| ಪ.ಜಾ. | 01 | – | – | – | – | – | – | **01** |
| ಪ.ಪಂ. | – | – | – | – | – | – | – | – |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | – | – | – | – | – | – | – | – |
| **ಒಟ್ಟು :** | **01** | – | – | – | – | – | – | **01** |
| ಅಂ.ವಿ :– * ದೃಷ್ಟಿ ಮಾಂದ್ಯ | | | | | | | | |

| (03) ಗೃಹರಕ್ಷಕ ಮತ್ತು ಪೌರರಕ್ಷಣಾ ಇಲಾಖೆ, ಬೆಂಗಳೂರು<br>ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ–03 | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
| ಪ.ಜಾ. | 01 | – | – | – | – | – | – | **01** |
| ಪ.ಪಂ. | 01 | – | – | – | – | – | – | **01** |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | – | – | – | – | – | – | **01** |
| ಒಟ್ಟು : | 03 | – | – | – | – | – | – | **03** |

| (04) ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು<br>ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ–37 | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
| ಪ.ಜಾ. | 02 | 01 | 01 | 01 | – | – | – | **05** |
| ಪ.ಪಂ. | – | 01 | 01 | – | – | – | – | **02** |
| ಪ್ರ–1 | – | – | 01 | – | – | – | – | **01** |
| ಪ್ರ–2(ಎ) | 02 | 01 | 02 | 01 | – | – | – | **06** |
| ಪ್ರ–2(ಬಿ) | – | – | 01 | – | – | – | – | **01** |
| ಪ್ರ–3(ಎ) | – | 01 | – | – | – | – | – | **01** |
| ಪ್ರ–3(ಬಿ) | – | 01 | 01 | – | – | – | – | **02** |
| ಸಾ.ಅ. | 04 | 06 | 05 | 02 | 01 | – | 01 (*) | **19** |
| **ಒಟ್ಟು :** | **08** | **11** | **12** | **04** | **01** | – | **01** | **37** |
| ಅಂ.ವಿ :– *ಅಂಧ/ದೃಷ್ಟಿಮಾಂದ್ಯ | | | | | | | | |

| ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು<br>ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ–06 | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
| ಪ.ಜಾ. | – | 01 | – | – | – | – | – | **01** |
| ಪ.ಪಂ. | 01 | – | – | – | – | – | – | **01** |
| ಪ್ರ–1 | – | – | – | – | – | – | – | – |
| ಪ್ರ–2(ಎ) | 01 | – | – | – | – | – | – | **01** |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | – | 01 | – | – | – | 01(*) | **03** |
| ಒಟ್ಟು : | **03** | **01** | **01** | – | – | – | **01** | **06** |
| ಅಂ.ವಿ :– *ಅಂಧ/ದೃಷ್ಟಿಮಾಂದ್ಯ | | | | | | | | |

| (05) ರೇಷ್ಮೆ ಇಲಾಖೆ, ಬೆಂಗಳೂರು<br>ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ–12 | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
| ಪ.ಜಾ. | 01 | 01 | – | – | – | – | – | **02** |
| ಪ.ಪಂ. | 01 | 01 | – | – | – | – | – | **02** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | – | – | – | – | – | – | **01** |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | 01 | – | – | – | – | – | – | **01** |
| ಸಾ.ಅ. | 01 | 02 | 01 | – | – | – | 01 (*) | **05** |
| ಒಟ್ಟು : | **06** | **04** | **01** | – | – | – | **01** | **12** |
| *ಅಂಧ/ದೃಷ್ಟಿಮಾಂದ್ಯ | | | | | | | | |

| (06) ಕರ್ನಾಟಕ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು<br>ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ: 03 | | | | | | | | |
|---|---|---|---|---|---|---|---|---|
| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
| ಪ.ಜಾ. | 01 | – | – | – | – | – | – | **01** |
| ಪ.ಪಂ. | 01 | – | – | – | – | – | – | **01** |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | – | – | – | – | – | – | **01** |
| ಒಟ್ಟು : | **03** | – | – | – | – | – | – | **03** |

**(07) ಪೌರಾಡಳಿತ ಇಲಾಖೆ (ಕೇಂದ್ರ ಕಛೇರಿ), ಬೆಂಗಳೂರು**

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ : 04

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸ್ಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | – | – | – | – | – | – | **01** |
| ಪ.ಪಂ. | 01 | – | – | – | – | – | – | **01** |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | 01 | – | – | – | – | – | **02** |
| **ಒಟ್ಟು :** | **03** | **01** | – | – | – | – | – | **04** |

**ಪೌರಾಡಳಿತ ಇಲಾಖೆ (ಕೇಂದ್ರ ಕಛೇರಿ), ಬೆಂಗಳೂರು**

ಹೈದರಾಬಾದ್–ಕರ್ನಾಟಕ ರಾಜ್ಯ ವೃಂದದ ಹುದ್ದೆಗಳ ಸಂಖ್ಯೆ : 01

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸ್ಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | – | – | – | – | – | – | – | – |
| ಪ.ಪಂ. | – | – | – | – | – | – | – | – |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | – | – | – | – | – | – | **01** |
| **ಒಟ್ಟು :** | **01** | – | – | – | – | – | – | **01** |

**(08) ಪೌರಾಡಳಿತ ಇಲಾಖೆ (ಮಹಾನಗರ ಪಾಲಿಕೆ ವಿಭಾಗ), ಬೆಂಗಳೂರು**

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ : 04

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸ್ಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | – | – | – | – | – | – | – | – |
| ಪ.ಪಂ. | – | – | – | – | – | – | – | – |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | 01 | – | – | – | – | **01** |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | 01 | – | – | – | – | – | – | **01** |
| ಸಾ.ಅ. | – | 01 | – | 01 | – | – | – | **02** |
| **ಒಟ್ಟು :** | **01** | **01** | **01** | **01** | – | – | – | **04** |

(09) ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬಾಗಲಕೋಟೆ ಜಿಲ್ಲೆ.

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ: 07

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | – | – | – | – | – | – | **01** |
| ಪ.ಪಂ. | 01 | – | – | – | – | – | – | **01** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | – | – | – | – | – | – | **01** |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | 01 | 01 | – | – | – | – | **03** |
| **ಒಟ್ಟು :** | **05** | **01** | **01** | – | – | – | – | **07** |

(10) ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಳಗಾವಿ ಜಿಲ್ಲೆ.

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ: 13

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | 01 | – | – | – | – | – | **02** |
| ಪ.ಪಂ. | 01 | – | – | – | – | – | – | **01** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | 01 | – | – | – | – | – | **02** |
| ಪ್ರ–2(ಬಿ) | 01 | – | – | – | – | – | – | **01** |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | 02 | 02 | – | – | – | 01(*) | **06** |
| **ಒಟ್ಟು :** | **06** | **04** | **02** | – | – | – | **01** | **13** |

ಅಂ.ವಿ.– *ಅಂಧ/ದೃಷ್ಟಿಮಾಂದ್ಯ

(11) ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ.

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ: 12

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | 01 | – | – | – | – | – | **02** |
| ಪ.ಪಂ. | 01 | – | – | – | – | – | – | **01** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | – | – | – | – | – | – | **01** |
| ಪ್ರ–2(ಬಿ) | 01 | – | – | – | – | – | – | **01** |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | 02 | 02 | – | – | – | 01 (*) | **06** |
| **ಒಟ್ಟು :** | **06** | **03** | **02** | – | – | – | **01** | **12** |

ಅಂ.ವಿ:– * ಅಂಧ/ದೃಷ್ಟಿಮಾಂದ್ಯ

**(12) ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು.**

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ: 15

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | 01 | 01 | – | – | – | – | **03** |
| ಪ.ಪಂ. | 01 | – | – | – | – | – | – | **01** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | 01 | – | – | – | – | – | **02** |
| ಪ್ರ–2(ಬಿ) | 01 | – | – | – | – | – | – | **01** |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 02 | 02 | 02 | – | – | – | 01 (*) | **07** |
| **ಒಟ್ಟು :** | **07** | **04** | **03** | – | – | – | **01** | **15** |

ಅಂ.ವಿ:– * ಅಂಧ/ದೃಷ್ಟಿಮಾಂದ್ಯ

**(13) ಜಿಲ್ಲಾಧಿಕಾರಿಗಳ ಕಾರ್ಯಾಲಯ, ಗದಗ ಜಿಲ್ಲೆ.**

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ: 07

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | – | – | – | – | – | – | **01** |
| ಪ.ಪಂ. | 01 | – | – | – | – | – | – | **01** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | – | – | – | – | – | – | **01** |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | 01 | 01 | – | – | – | – | **03** |
| **ಒಟ್ಟು :** | **05** | **01** | **01** | – | – | – | – | **07** |

**(14) ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕಲಬುರ್ಗಿ ಜಿಲ್ಲೆ.**

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ : 03

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | – | 01 | – | – | – | – | **02** |
| ಪ.ಪಂ. | – | – | – | – | – | – | – | – |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | – | – | – | – | – | – | **01** |
| **ಒಟ್ಟು :** | **02** | – | **01** | – | – | – | – | **03** |

ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕಲಬುರ್ಗಿ ಜಿಲ್ಲೆ.

ಹೈದರಾಬಾದ್–ಕರ್ನಾಟಕ ರಾಜ್ಯ ವೃಂದದ ಹುದ್ದೆಗಳ ಸಂಖ್ಯೆ : 11

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | – | – | – | – | – | – | – | – |
| ಪ.ಪಂ. | – | – | – | – | – | – | – | – |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | 01 | – | – | – | – | – | – | **01** |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 02 | 03 | 03 | – | – | – | 01 (*) | **09** |
| **ಒಟ್ಟು :** | **04** | **03** | **03** | – | – | – | **01** | **11** |

ಅಂ.ವಿ:– * ಅಂಧ/ದೃಷ್ಟಿಮಾಂದ್ಯ

(15) ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೊಪ್ಪಳ ಜಿಲ್ಲೆ.

ಹೈದರಾಬಾದ್–ಕರ್ನಾಟಕ ವೃಂದದ ಹುದ್ದೆಗಳ ಸಂಖ್ಯೆ : 02

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | – | – | – | – | – | – | – | – |
| ಪ.ಪಂ. | – | – | – | – | – | – | – | – |
| ಪ್ರ–1 | – | – | – | – | – | – | – | – |
| ಪ್ರ–2(ಎ) | – | – | – | – | – | – | – | – |
| ಪ್ರ–2(ಬಿ) | – | – | – | – | – | – | – | – |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | 01 | – | – | – | – | – | **02** |
| **ಒಟ್ಟು :** | **01** | **01** | – | – | – | – | – | **02** |

(16) ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ.

ಉಳಿದ ಮೂಲ ವೃಂದದ ಹುದ್ದೆಗಳ ಸಂಖ್ಯೆ : 11

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾಸೈ | ಕ.ಮಾ.ಅ | ಯೋ.ಅ. | ಅಂ.ವಿ. | ಒಟ್ಟು |
|---|---|---|---|---|---|---|---|---|
| ಪ.ಜಾ. | 01 | 01 | – | – | – | – | – | **02** |
| ಪ.ಪಂ. | 01 | – | – | – | – | – | – | **01** |
| ಪ್ರ–1 | 01 | – | – | – | – | – | – | **01** |
| ಪ್ರ–2(ಎ) | 01 | – | – | – | – | – | – | **01** |
| ಪ್ರ–2(ಬಿ) | 01 | – | – | – | – | – | – | **01** |
| ಪ್ರ–3(ಎ) | – | – | – | – | – | – | – | – |
| ಪ್ರ–3(ಬಿ) | – | – | – | – | – | – | – | – |
| ಸಾ.ಅ. | 01 | 02 | 01 | – | – | – | 01 (*) | **05** |
| **ಒಟ್ಟು :** | **06** | **03** | **01** | – | – | – | **01** | **11** |

ಅಂ.ವಿ:– * ಅಂಧ/ದೃಷ್ಟಿಮಾಂದ್ಯ

